## ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ವಿಧಾನ ಪರಿಷತ್ ಸದಸ್ಯರ ಹೆಸರು : | ಮಾನ್ಯ ಡಾ: ತೇಜಸ್ವಿನಿ ಗೌಡ |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : | 1340 |
| ಉತ್ತರಿಸಬೇಕಾದ ದಿನಾಂಕ : | 21-12-2018 |
| ಉತ್ತರಿಸುವ ಸಚಿವರು | ಮಾನ್ಯ ನಗರಾಭಿವೃದ್ಧಿ ಮತ್ತು ವಸತಿ ಸಚಿವರು |

| | ಪ್ರಶ್ನೆ | ಉತ್ತರ |
|---|---|---|
| (ಅ) | ಕರ್ನಾಟಕ ರಾಜ್ಯದಲ್ಲಿರುವ ಎಷ್ಟು ಕುಟುಂಬಗಳು ಹಾಗೂ ಫಲಾಪೇಕ್ಷಿತರು ವಸತಿಗಾಗಿ ಅರ್ಜಿ ಸಲ್ಲಿಸಿದ್ದಾರೆ; | ಕೇಂದ್ರ ಸರ್ಕಾರದ ಮಾರ್ಗಸೂಚಿಯಂತೆ ವಸತಿ ರಹಿತರ ಮತ್ತು ನಿವೇಶನ ರಹಿತ ಕುಟುಂಬಗಳನ್ನು ಗುರುತಿಸುವ ಕಾರ್ಯ ಕೈಗೊಳ್ಳಲಾಗಿದೆ. ಗ್ರಾಮೀಣ ಪ್ರದೇಶದ ವ್ಯಾಪ್ತಿಯಲ್ಲಿ 1750121 ಲಕ್ಷ ವಸತಿ ರಹಿತರನ್ನು ಮತ್ತು ನಗರ ಪ್ರದೇಶದಲ್ಲಿ 1912173 ಲಕ್ಷ ವಸತಿರಹಿತರು ಕಂಡು ಬಂದಿರುತ್ತಾರೆ. |
| (ಆ) | ವಸತಿ ಹೀನರ ಪ್ರಮಾಣ ಎಷ್ಟು; (ಜಿಲ್ಲಾವಾರು ಮಾಹಿತಿ ನೀಡುವುದು) ದೇಶೀಯ ಕ್ರೀಡಾ ಸಾಧಕರಿಗೆ ವಸತಿ ನಿವೇಶನ ನೀಡಲಾಗಿದೆಯೆ; | ಒಟ್ಟು 3662294 ವಸತಿ ರಹಿತರಿದ್ದು, ಜಿಲ್ಲಾವಾರು ವಿವರಗಳನ್ನು ಅನುಬಂಧ-1 ರಲ್ಲಿ ನೀಡಿದೆ.<br><br>ದೇಶೀಯ ಕ್ರೀಡಾ ಸಾಧಕರಿಗೆ ಯಾವುದೇ ವಿಶೇಷ ಯೋಜನೆ ಇರುವುದಿಲ್ಲ, ಆದಾಗ್ಯೂ ದೇಶೀಯ ಕ್ರೀಡಾ ಸಾಧಕರು ಪ್ರಸ್ತುತ ಲಭ್ಯವಿರುವ ನಿವೇಶನ ಯೋಜನೆಗಳಡಿ ಅರ್ಹರಿದ್ದಲ್ಲಿ ನಿವೇಶನ ಸೌಕರ್ಯ ಪಡೆಯಬಹುದಾಗಿದೆ. |
| (ಇ) | ಎಲ್ಲರಿಗೂ ವಸತಿ ಕಲ್ಪಿಸಲು ಸರ್ಕಾರದಲ್ಲಿ ಯೋಜನೆ ಇದೆಯೆ; ಒದಗಿಸಿರುವ ಅನುದಾನವೆಷ್ಟು; | ರಾಜ್ಯದ ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲಿನ ಅರ್ಹ ವಸತಿ ರಹಿತರಿಗೆ ವಸತಿ ಸೌಕರ್ಯವನ್ನು ಕಲ್ಪಿಸಲು ಈ ಕೆಳಕಂಡ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.<br>• ಬಸವ ವಸತಿ ಯೋಜನೆ<br>• ಪ್ರಧಾನ ಮಂತ್ರಿ ಆವಾಸ್ ಯೋಜನೆ- ಗ್ರಾಮೀಣ<br>• ಡಾ॥ ಬಿ.ಆರ್. ಅಂಬೇಡ್ಕರ್ ನಿವಾಸ್ - ಗ್ರಾಮೀಣ<br>• ದೇವರಾಜ ಅರಸ್ ವಸತಿ ಯೋಜನೆ - ಗ್ರಾಮಿಣ<br>• ಪ್ರಧಾನ ಮಂತ್ರಿ ಆವಾಸ್ ಯೋಜನೆ- ನಗರ<br>• ಡಾ॥ ಬಿ.ಆರ್. ಅಂಬೇಡ್ಕರ್ ನಿವಾಸ್ - ನಗರ<br>• ದೇವರಾಜ ಅರಸ್ ವಸತಿ ಯೋಜನೆ - ನಗರ<br>• ರಾಜೀವ್ ಆವಾಸ್ ಯೋಜನೆ<br><br>2018-19ನೇ ಸಾಲಿಗೆ ಈ ಮೇಲೆ ತಿಳಿಸಲಾದ ವಿವಿಧ ವಸತಿ ಯೋಜನೆಗಳಡಿ ಸರ್ಕಾರವು ರೂ.3,268.68 ಕೋಟಿಗಳನ್ನು ಒದಗಿಸಿದ್ದು, ಯೋಜನೆವಾರು ವಿವರ ಈ ಕೆಳಗಿನಂತಿದೆ :-<br>(ರೂ. ಕೋಟಿಗಳಲ್ಲಿ) |

| ಯೋಜನೆ | ಅನುದಾನ |
|---|---|
| ಬಸವ ವಸತಿ ಯೋಜನೆ | 650.00 |
| ವಾಜಪೇಯಿ ನಗರ ವಸತಿ ಯೋಜನೆ | 250.00 |
| ಡಾ॥ ಬಿ.ಆರ್. ಅಂಬೇಡ್ಕರ್ ನಿವಾಸ್ | 839.82 |
| ದೇವರಾಜ ಅರಸ್ ವಸತಿ ಯೋಜನೆ | 50.00 |
| ಪ್ರಧಾನ ಮಂತ್ರಿ ಆವಾಸ್ ಯೋಜನೆ(ನಗರ) | 372.38 |

| | |
|---|---|
| ಪ್ರಧಾನ ಮಂತ್ರಿ ಆವಾಸ್ ಯೋಜನೆ-(ಗ್ರಾಮೀಣ) | 1,000.00 |
| ರಾಜೀವ್ ಅವಾಸ ಯೋಜನೆ | 106.48 |
| ಒಟ್ಟು | **3,268.68** |

(ಈ) ಕೇಂದ್ರದಿಂದ ರಾಜ್ಯಕ್ಕೆ ಬಂದಿರುವ ವಸತಿ ಯೋಜನೆಗಳಾವುವು; ಅನುದಾನವೆಷ್ಟು; ಪ್ರಗತಿಯ ಚಿತ್ರಣ ನೀಡುವುದು;

ಕೇಂದ್ರದ ಕೆಳಕಂಡ ವಸತಿ ಯೋಜನೆಗಳನ್ನು ರಾಜ್ಯ ಸರ್ಕಾರದಿಂದ ಅನುಷ್ಠಾನ ಗೊಳಿಸಲಾಗುತ್ತಿದೆ.

1. ಪ್ರಧಾನ ಮಂತ್ರಿ ಆವಾಸ್ ಯೋಜನೆ(ಗ್ರಾಮೀಣ)
2. ಪ್ರಧಾನ ಮಂತ್ರಿ ಆವಾಸ್ ಯೋಜನೆ(ನಗರ)
3. ರಾಜೀವ್ ಅವಾಸ್ ಯೋಜನೆ

ಪ್ರಸಕ್ತ ಆರ್ಥಿಕ ವರ್ಷದಲ್ಲಿ ಕೇಂದ್ರ ಸರ್ಕಾರದಿಂದ ರೂ.2,810.64 ಕೋಟಿಗಳ ಅನುದಾನವನ್ನು ಒದಗಿಸಲಾಗಿದೆ. ಈ ವಿವರ ಕೆಳಗಿನಂತಿದೆ :-

(ರೂ. ಕೋಟಿಗಳಲ್ಲಿ)

| ಯೋಜನೆ | ಅನುದಾನ |
|---|---|
| ಪ್ರಧಾನ ಮಂತ್ರಿ ಆವಾಸ್ ಯೋಜನೆ(ನಗರ) | 1704.16 |
| ಪ್ರಧಾನ ಮಂತ್ರಿ ಆವಾಸ್ ಯೋಜನೆ-(ಗ್ರಾಮೀಣ) | 1000.00 |
| ರಾಜೀವ್ ಅವಾಸ ಯೋಜನೆ | 106.48 |
| ಒಟ್ಟು | **2810.64** |

ಕೇಂದ್ರ ಸರ್ಕಾರವು 2016-17 ರಿಂದ ಇಂದಿರಾ ಆವಾಸ್ ಯೋಜನೆಯನ್ನು ಮರು ನಾಮಕರಣ ಮಾಡಿ ಪ್ರಧಾನ ಮಂತ್ರಿ ಆವಾಸ್ ಯೋಜನೆ (ಗ್ರಾಮೀಣ) ಅನ್ನು ಜಾರಿಗೆ ತರಲಾಗಿರುತ್ತದೆ.

ಪ್ರಧಾನ ಮಂತ್ರಿ ಆವಾಸ್ ಯೋಜನೆ-(ಗ್ರಾ) ಮತ್ತು ಇಂದಿರಾ ಆವಾಸ್ ಯೋಜನೆಗಳಡಿ ಪ್ರಗತಿ ವಿವರ ಈ ಕೆಳಕಂಡಂತೆ ಇದೆ.

| ಯೋಜನೆ | ಗುರಿ | ಫಲಾನುಭವಿ ಆಯ್ಕೆ | ಪೂರ್ಣಗೊಂಡ ಮನೆಗಳು | ಪ್ರಗತಿಯಲ್ಲಿರುವ ಮನೆಗಳು | ಪ್ರಾರಂಭವಾಗದ ಮನೆಗಳು |
|---|---|---|---|---|---|
| ಇಂದಿರಾ ಆವಾಸ್ ಯೋಜನೆ (2011-12 ರಿಂದ 2015-16) | 590556 | 590556 | 536055 | 54501 | 0 |
| ಪ್ರಧಾನ ಮಂತ್ರಿ ಆವಾಸ್ ಯೋಜನೆ (ಗ್ರಾ) (2016-17 ರಿಂದ 2017-18) | 145349 | 145349 | 62163 | 51174 | 32012 |
| ಒಟ್ಟು | 735905 | 735905 | 598218 | 105675 | 32012 |

ಪ್ರಧಾನ ಮಂತ್ರಿ ಆವಾಸ್ ಯೋಜನೆ-ನಗರ ಅಡಿ ಪ್ರಗತಿ ವಿವರ ಈ ಕೆಳಕಂಡಂತೆ ಇದೆ.

| ಒಟ್ಟು ಅನುಮೋದನೆಗೊಂಡಿರುವ ಯೋಜನೆಗಳು | ಒಟ್ಟು ಮನೆಗಳ ಸಂಖ್ಯೆ | ಯೋಜನಾ ಮೊತ್ತ (ರೂ. ಕೋಟಿಗಳಲ್ಲಿ) | ಪ್ರಗತಿ ಯಲ್ಲಿರುವ ಮನೆಗಳು | ಮುಕ್ತಾಯ ಗೊಂಡಿರುವ ಮನೆಗಳು | ಪ್ರಾರಂಭ ವಾಗದೇ ಇರುವ ಮನೆಗಳು |
|---|---|---|---|---|---|
| 1075 | 343710 | 17122.81 | 47736 | 46413 | 249561 |

ರಾಜೀವ್ ಆವಾಸ್ ಯೋಜನೆ-ನಗರ ಅಡಿ ಪ್ರಗತಿ ವಿವರ ಈ ಕೆಳಕಂಡಂತೆ ಇದೆ.

| ಒಟ್ಟು ಅನುಮೋದನೆಗೊಂಡಿರುವ ಯೋಜನೆಗಳು | ಒಟ್ಟು ಮನೆಗಳ ಸಂಖ್ಯೆ | ಯೋಜನಾ ಮೊತ್ತ (ರೂ. ಕೋಟಿಗಳಲ್ಲಿ) | ಪ್ರಗತಿ ಯಲ್ಲಿರುವ ಮನೆಗಳು | ಮುಕ್ತಾಯ ಗೊಂಡಿರುವ ಮನೆಗಳು | ಪ್ರಾರಂಭ ವಾಗದೇ ಇರುವ ಮನೆಗಳು |
|---|---|---|---|---|---|
| 20 | 22133 | 1129.26 | 5581 | 16552 | 0 |

| | | |
|---|---|---|
| (ಉ) | ವಿಶೇಷವಾಗಿ ಚಿತ್ರರಂಗ, ಸಾಹಿತ್ಯ, ಸಂಗೀತ, ಚಿತ್ರಕಲೆಯಂತಹ ಕ್ಷೇತ್ರದಲ್ಲಿನ ಅದ್ವಿತೀಯ ಸಾಧಕರಿಗೆ ಪ್ರೇರಣೆ ನೀಡಬಲ್ಲಂತಹ ಸುಂದರ ಪರಿಸರದಲ್ಲಿ ನಿವೇಶನ ಒದಗಿಸುವ ವಿಶೇಷ ಆಲೋಚನೆ ಯೋಜನೆ ಸರ್ಕಾರಕ್ಕಿದೆಯೇ? | ಸರ್ಕಾರವು, ಬಡತನ ರೇಖೆಗಿಂತ ಕೆಳಗಿರುವ ಪರಿಶಿಷ್ಟ ಜಾತಿ/ಪಂಗಡ, ಅಲ್ಪಸಂಖ್ಯಾತ ಹಾಗೂ ಇತರ ವರ್ಗದ ಫಲಾನುಭವಿಗಳಿಗೆ ವಸತಿ ಸೌಕರ್ಯವನ್ನು ಕಲ್ಪಿಸಿ ಕೊಡಲಾಗುತ್ತಿದೆ. ಚಿತ್ರರಂಗ, ಸಾಹಿತ್ಯ, ಸಂಗೀತ, ಚಿತ್ರಕಲೆಯಂತಹ ಕ್ಷೇತ್ರದಲ್ಲಿನ ಕ್ಷೇತ್ರದಲ್ಲಿ ಬರುವವರೂ ಸಹ ವಸತಿ ಮಾರ್ಗಸೂಚಿಗಳಲ್ಲಿ ತಿಳಿಸಿರುವ ನಿಯಮಗಳಂತೆ ಅರ್ಹರಿದ್ದಲ್ಲಿ ವಸತಿ ಸೌಕರ್ಯ ಪಡೆಯಲು ಅವಕಾಶ ಇರುತ್ತದೆ. |

ಕಡತ ಸಂಖ್ಯೆ: ವಇ 309 ಹೆಚ್‌ಎಎಂ 2018

(ಯು ಟಿ ಖಾದರ್)
ನಗರಾಭಿವೃದ್ಧಿ ಮತ್ತು ವಸತಿ ಸಚಿವರು